ಡಾ॥ ಜಿ.ಎಸ್. ದೀಕ್ಷಿತ್

# ಪ್ರವಾಸಿ ಸಾಹಿತ್ಯದ ಅಧ್ಯಯನದಲ್ಲಿ ಮುಂದಿನ ಹೆಜ್ಜೆಗಳು

ಕೆ.ಎ. ನೀಲಕಂಠಶಾಸ್ತ್ರಿಗಳು ೪೦ ವರ್ಷದ ಕೆಳಗೆ ದಕ್ಷಿಣ ಭಾರತದ ಬಗ್ಗೆ ಬರೆದ ವಿದೇಶಿ ಪ್ರವಾಸಿಗಳ ಲೇಖನಗಳನ್ನು Foreign Notices of South India ಎನ್ನುವ ಗ್ರಂಥದಲ್ಲಿ ಕಲೆಹಾಕಿದ್ದಾರೆ. ಕನ್ನಡದಲ್ಲಿ ಹೆಚ್.ಎಲ್. ನಾಗೇಗೌಡರು ಪ್ರಾಚೀನ ಮತ್ತು ಮಧ್ಯ ಯುಗಗಳಲ್ಲಿ ಭಾರತಕ್ಕೆ ಬಂದ ಅನೇಕ ವಿದೇಶಿಯರ ಬರಹಗಳನ್ನು ಆ ಸಂಪುಟಗಳಲ್ಲಿ ಸಂಗ್ರಹಿಸಿದ್ದಾರೆ. ಹೀಗಿರುವಾಗ ಇನ್ನು ಈ ವಿಷಯದಲ್ಲಿ ಹೊಸದೇನು ಹೇಳಲು ಸಾಧ್ಯವಿದೆ ಎಂಬ ಪ್ರಶ್ನೆಗೆ ಉತ್ತರ ಸಾಧ್ಯವಿದೆ.

೧. ಭಾರತಕ್ಕೆ ಪ್ರವಾಸಿಗಳು ಯುರೋಪು, ಪಶ್ಚಿಮ ಏಷಿಯಾ ಮತ್ತು ಪೂರ್ವ ಏಷಿಯಾಗಳಿಂದ ಬಂದರು. ಅನೇಕ ಪ್ರವಾಸಿಗಳು ಭಾರತದ ಬಗ್ಗೆ ಏನು ಬರೆದಿದ್ದಾರೊ ಅಷ್ಟನ್ನು ಮಾತ್ರ ನಮ್ಮ ಭಾಷಾಂತರ ಕಾರರು ಭಾಷಾಂತರಿಸಿದ್ದಾರೆ. ಉದಾಹರಣೆಗೆ, ಟ್ಯಾವರ್ನಿಯರ್ ಎನ್ನುವ ವಜ್ರ ವ್ಯಾಪಾರಿಯು ಫ್ರಾನ್ಸಿನಿಂದ ಭಾರತಕ್ಕೆ ೭ ಸಲ ಬಂದು ವ್ಯಾಪಾರ ಮಾಡಿ ಕೊಂಡು ಹೋದನು. ವಜ್ರವ್ಯಾಪಾರದಲ್ಲಿ ಇವನು ಬಹಳ ಚತುರನಾಗಿದ್ದನು. ಇವನ ಪ್ರವಾಸದ ವರದಿಯನ್ನು ಇಂಗ್ಲೀಷಿಗೆ ಭಾಷಾಂತರಿಸಿದವರು ಬಾಲ್ ಎನ್ನುವ ಭೂಗರ್ಭ ಶಾಸ್ತ್ರಜ್ಞ. ಇವರ ಇಂಗ್ಲೀಷ್ ಭಾಷಾಂತರದ ಹೆಸರು Tavernier's Travels in India. ಅವನು ತನ್ನ ಪ್ರವಾಸದಲ್ಲಿ ಭಾರತವಲ್ಲದೆ ಇನ್ನು ಅನೇಕ ದೇಶಗಳಲ್ಲಿಯು ತನ್ನ ಅನುಭವಗಳನ್ನು ಬರೆದಿದ್ದಾನೆ. ಬಾಲ್ ಅವರು ಭಾರತದ ಬಗ್ಗೆ ಹೇಳಿದ್ದನ್ನು ಮಾತ್ರ ಭಾಷಾಂತರಿಸಿದ್ದಾರೆ. ಯಾಕೆಂದರೆ ಅವರ ಆಸ್ಥೆ ಭಾರತೀಯ ಇತಿಹಾಸಕ್ಕೆ ಸೀಮಿತವಾಗಿತ್ತು. ಈಗ ನಮಗೆ ತಿಳಿದ ಹಾಗೆ ಟ್ಯಾವರ್ನಿಯರ್ ಪರ್ಷಿಯಾದ ಮಾರ್ಗವಾಗಿ ಭಾರತಕ್ಕೆ ಬಂದ. ಪರ್ಷಿಯಾದಲ್ಲಿ ಮತ್ತು ರಷ್ಯಾದಲ್ಲಿ ಭಾರತೀಯ ವ್ಯಾಪಾರಿಗಳು ಬಹುಸಂಖ್ಯೆಯಲ್ಲಿದ್ದು ಒಳ್ಳೆಯ ಹೆಸರನ್ನು ಗಳಿಸಿದ್ದರು. ಕ್ಯಾಸ್ಪಿಯನ್ ಸಮುದ್ರದಲ್ಲಿ ಈ ವ್ಯಾಪಾರಿಗಳು ತಮ್ಮ ಸ್ವಂತ ಹಡಗುಗಳಲ್ಲಿ ಸಾಮಾನುಗಳನ್ನು ಸಾಗಿಸುತ್ತಿದ್ದರು. ಪರ್ಷಿಯಾ ಮತ್ತು ರಷ್ಯಾದ ರಾಜರು ಅವರ ಸ್ನೇಹವನ್ನು ಬಯಸುತ್ತಿದ್ದರು.[1] ಇಂಥ ವರ್ತಕರನ್ನು ಟ್ಯಾವರ್ನಿಯರ್ ಸಹಜವಾಗಿ ಭೇಟಿಯಾಗಿದ್ದನು.[2] ಅವರ ಬಗೆಗಿನ ಟ್ಯಾವರ್ನಿಯರಿನ ಬರಹವನ್ನು ನಾವು ತಿಳಿದುಕೊಳ್ಳುವುದು ಅವಶ್ಯ.

ಅದೇ ರೀತಿ ಬರ್ನಿಯರ್ ಎನ್ನುವ ಇನ್ನೊಬ್ಬ ಫ್ರೆಂಚ್ ಪ್ರವಾಸಿಯ ಬರಹವನ್ನು ವಿ.ಎ. ಸ್ಮಿತ್ ಮತ್ತು ಕಾನ್‌ಸ್ಟೆಬಲ್ ಎನ್ನುವವರು ಇಂಗ್ಲೀಷಿಗೆ ಭಾಷಾಂತರಿಸಿದ್ದಾರೆ. ಅವರ ಭಾಷಾಂತರದ ಹೆಸರು Bernier's Travels in the Moghul Empire

1. P.M. Kemp: *Bharat-Rus,* Delhi, 1958, p. 80
2. *Ibid*., p. 72. ಭಾರತೀಯ ವರ್ತಕರು ಪರ್ಷಿಯನ್ ಶ್ರೀಮಂತರ ಹಣವನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಂಡಿದ್ದರು.

ಬರ್ನಿಯರನು ಪಶ್ಚಿಮ ಏಷ್ಯಾದಲ್ಲಿಯ ಭಾರತೀಯರ ಬಗೆಗೆ ಏನಾದರೂ ಬರೆದಿದ್ದರೆ, ನಾವು ತಿಳಿದುಕೊಳ್ಳು ವುದು ಅವಶ್ಯ. ಇದೇ ರೀತಿ ಪಿತ್ರೊ ಡೆಲ್ಲಾವಲ್ಲೆ ಎನ್ನುವ ಇಟಾಲಿಯನ್ ಪ್ರವಾಸಿಯು ಪಶ್ಚಿಮ ಏಷಿಯಾ ಮಾರ್ಗದಿಂದ ಭಾರತಕ್ಕೆ ಬಂದನು. ಅವನ ಪುಸ್ತಕದ ಭಾಷಾಂತರದ ಹೆಸರು **Pietro Della Valle's Travels in India.** ಇವನು ಪಶ್ಚಿಮ ಏಷ್ಯಾದಲ್ಲಿಯ ಭಾರತೀಯರ ಬಗೆಗೆ ಬರೆದಿದ್ದನ್ನು ನಾವು ನೋಡಲೇ ಬೇಕು. ಯಾಕೆಂದರೆ ೧೭ನೇ ಶತಮಾನದಲ್ಲಿ ಬಂದ ಈ ಪ್ರವಾಸಿಯು ಬಹು ಮೇಧಾವಿ ಮತ್ತು ಅವನ ಬರಹ ತಪ್ಪಿಲ್ಲದ್ದೆಂದೆ ಹೆಸರುವಾಸಿಯಾಗಿದೆ.[3]

೨. ಪ್ರವಾಸಿಗಳ ಸಂಪೂರ್ಣ ವರದಿ ಇಂಗ್ಲೀಷಿ ನಲ್ಲಿರಬಹುದು. ಆದರೆ ನಮ್ಮ ಲಕ್ಷ್ಯ ಆ ವರದಿಯಲ್ಲಿ ಭಾರತಕ್ಕೆ ಮಾತ್ರ ಕೇಂದ್ರೀಕೃತವಾಗಿರಬಹುದು. ಗ್ರೀಕ್ ಭಾಷೆಯಲ್ಲಿ **Periplus of the Erythraen Sea** ಎನ್ನುವ ಗ್ರಂಥವಿದೆ. **Erythraen Sea** ಎಂದರೆ ಅರಬ್ಬೀ ಸಮುದ್ರ. ಇದರ ತೀರ ಪ್ರದೇಶದಲ್ಲಿ ಸಂಚರಿಸಿದ ಪ್ರವಾಸಿಯ ಕಥನವಿದು. ಪ್ರವಾಸಿಯ ಹೆಸರು ಕೊಟ್ಟಿಲ್ಲ. ಈ ವರದಿಯನ್ನು ಬರೆದದ್ದು ಕ್ರಿ.ಶ. ೭೫ರಲ್ಲಿ. ಲೇಖಕನು ಸ್ವತಃ ಎಲ್ಲಾ ಅರಬ್ಬೀ ತೀರದ ಮೇಲಿರುವ ದೇಶಗಳಿಗೆ ಹೋಗಿ, ಅಲ್ಲಿಯ ವ್ಯಾಪಾರಿಗಳು, ವ್ಯಾಪಾರದ ಸರಕುಗಳ ಬಗೆಗೆ ಬರೆದಿದ್ದಾನೆ. ದಕ್ಷಿಣ ಭಾರತದ ಬಂದರುಗಳನ್ನು, ವ್ಯಾಪಾರೀ ಕೇಂದ್ರಗಳನ್ನು ವರ್ಣಿಸಿದ್ದಾನೆ. ಇವುಗಳನ್ನು ನಮ್ಮ ಇತಿಹಾಸಕಾರರು ತಿಳಿದುಕೊಂಡಿದ್ದಾರೆ. ಆದರೆ ಅದೇ ಲೇಖಕನು ಪ್ರಸ್ತುತ ಗ್ರಂಥದಲ್ಲಿ ಪೂರ್ವ ಆಫ್ರಿಕಾ ತೀರದ ಬಗೆಗೂ ಬರೆದಿದ್ದಾನೆ. ಅದನ್ನು ನಾವು ನಿರ್ಲಕ್ಷಿಸಿದ್ದೇವೆ. ನಮಗೂ ಅದಕ್ಕೂ ಏನು ಸಂಬಂಧ ವೆಂದು ತಾತ್ಸಾರ ಮಾಡಿದ್ದೇವೆ. ಈಚೆಗೆ ಒಬ್ಬ ಡಚ್ ವಿದ್ವಾಂಸರು ಆ ಭಾಗವನ್ನು ಓದಿ ಪೂರ್ವ ಆಫ್ರಿಕಾದ ಪ್ರತಿಯೊಂದು ಬಂದರಿನಲ್ಲಿಯೂ ಭಾರತೀಯ ವ್ಯಾಪಾರಿ ಗಳು ಇದ್ದುದನ್ನೂ ಮತ್ತು ಅಲ್ಲಿಯ ವ್ಯಾಪಾರದಲ್ಲಿ ಗಣನೀಯ ಪಾತ್ರವನ್ನು ವಹಿಸಿದ್ದಲ್ಲದೆ ಅವರು ಅಲ್ಲಿಂದ ಆಗ್ನೇಯ ಏಷ್ಯಾಕ್ಕೆ ವ್ಯಾಪಾರಕ್ಕೆ ಹೋಗುತ್ತಿದ್ದರೆಂದೂ ಹೇಳಿದ್ದಾರೆ. ಹೀಗೆ ಪ್ರವಾಸಿಗಳ ಸಂಪೂರ್ಣವರದಿ ಯನ್ನು ಓದುವುದು ಅವಶ್ಯ.

೩. ಇನ್ನು ಚೀನಿ ಪ್ರವಾಸಿಗಳ ಬರಹಗಳನ್ನು ನೋಡೋಣ. ಹ್ಯೂಯನತ್ಸಾಂಗನ ವಿಷಯ ನಾವು ಎಲ್ಲಾ ತಿಳಿದುಕೊಂಡಿದ್ದೇವೆಯೆ ? ನಾವು ತಿಳಿದುಕೊಂಡಿರ ವುದು ಅವನ ಭಾರತದಲ್ಲಿಯ ಅನುಭವಗಳನ್ನು ಮಾತ್ರ. ಹ್ವಿಲಿ ಎನ್ನುವವನು ಬರೆದಿರುವ ಹ್ಯೂಯನತ್ಸಾಂಗನ ಜೀವನ ಚರಿತ್ರೆಯನ್ನು ನಾವು ಉಪೇಕ್ಷೆ ಮಾಡಿದ್ದೇವೆ.[4] ಅದರಲ್ಲಿ ಹ್ಯೂಯನತ್ಸಾಂಗನ ವ್ಯಕ್ತಿತ್ವ ಹೆಚ್ಚು ಸ್ಪಷ್ಟ ವಾಗಿ ಎದ್ದು ಕಾಣುತ್ತದೆ. ಅವನು ಸಂಸ್ಕೃತದಲ್ಲಿ ಒಳ್ಳೆಯ ಪಂಡಿತ. ಬೌದ್ಧಮತದ ತತ್ವಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದ. ಅವನ ಭಾರತೀಯ ಗುರುಗಳ ಬಗ್ಗೆ ಅಸಾಧಾರಣ ಭಕ್ತಿ ಗೌರವಗಳನ್ನು ಇಟ್ಟುಕೊಂಡಿದ್ದ. ಅವನಿಗೆ ತನ್ನ ಮಾತೃಭೂಮಿ ಚೀನಾ ದೇಶದ ಬಗ್ಗೆ ಅಪಾರ ಪ್ರೀತಿ, ಹಿಡಿದ ಕೆಲಸ ಬಿಡದಿರುವ ಛಲ ಅವನದು. ಭಾರತಕ್ಕೆ ಹೋಗಿ ಸಂಸ್ಕೃತ ಮತ್ತು ಬೌದ್ಧ ಮತಗಳ ಹೆಚ್ಚಿನ ಅಧ್ಯಯನ ಮಾಡಿ ಚೀನಿಯರಿಗೆ ಬುದ್ಧನ ತತ್ವಗಳನ್ನು ಚೆನ್ನಾಗಿ ತಿಳಿಸಿಕೊಡಬೇಕೆಂಬ ಹಂಬಲ ಅವನದಾಗಿತ್ತು. ಇವೆಲ್ಲಾ ಮೇಲೆ ಹೇಳಿದ ಅವನ ಜೀವನ ಚರಿತ್ರೆಯಿಂದ ನಾವು ತಿಳಿದುಕೊಳ್ಳ ಬಹುದು.

ಇತ್ಸಿಂಗನ ಭಾರತದ ಬಗೆಗಿನ ಬರಹವನ್ನು ತಕಾಕಸು ಎನ್ನುವ ಜಪಾನೀ ವಿದ್ವಾಂಸರು ಭಾಷಾಂತರಿಸಿ ದ್ದಾರೆ.[5] ಇತ್ಸಿಂಗನ ಇನ್ನೊಂದು ಬರಹವನ್ನು ಇತ್ತೀಚಿಗೆ

---

3 K.A. Nilakanta Shastry : A *History of South India*, p. 33

4 Samuel Beal (Ed.) : *The Life of Hieun-Tsang by Hwili*, Dew Delhi, 1973; ಇದರ ಪೀಠಿಕೆಯಲ್ಲಿ ಇತ್ಸಿಂಗನ ಬಗೆಗೂ ಮಾಹಿತಿ ಇದೆ.

5 J. Takakasu (Ed.) : *Record of the Buddhist Religion as Practised in India and Malaya, Itsing*, New Delhi, 1966

ಬೇರೆಯವರು ಭಾಷಾಂತರಿಸಿದ್ದಾರೆ.[6] ಅದರಲ್ಲಿ ಇತ್ಸಿಂಗನು ತನ್ನ ಕಾಲದಲ್ಲಿ ಮತ್ತು ಅದಕ್ಕೆ ಮುಂಚೆ ಬಂದ ಚೀನ ಮತ್ತು ಕೊರಿಯಾದ ಪ್ರವಾಸಿಗಳ ಭಾರತದ ಪ್ರವಾಸದ ಬಗ್ಗೆ ಬರೆದಿದ್ದಾನೆ. ಇವನ ಬರೆಹಗಳಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದ ಕೆಲವು ವಿಷಯಗಳಿವೆ. ಚೀನಿ ಭಾಷೆಯಲ್ಲಿ ಭಾರತದ ವಿದ್ವಾಂಸರ ಬಗ್ಗೆ ಇರುವ ಮಾಹಿತಿ ಅಪಾರ. ನಮ್ಮ ವಿದ್ವಾಂಸರು ಈ ಭಾಷೆಯನ್ನು ಕಲಿಯದ ವಿನಃ ಪ್ರಾಚೀನ ಭಾರತದ ಬಗ್ಗೆ ಆ ಭಾಷೆಯಲ್ಲಿರುವ ಮಾಹಿತಿ ನಮಗೆ ದೊರಕುವುದಿಲ್ಲ.

೪. ಕೆಲವು ಪ್ರವಾಸಿಗಳ ಬರೆಹವನ್ನು ಮೊದಲು ಒಂದು ತರಹ ಅರ್ಥಮಾಡಿದರು. ಈಗ ಬೇರೆ ಅರ್ಥ ಮಾಡಿದ್ದಾರೆ. ಇದಕ್ಕೆ ಒಳ್ಳೆಯ ನಿದರ್ಶನ ರಷಿಯಾದ ನಿಕಿಟಿನ್ ಇವನ ವರದಿಯ ಮೊದಲನೆಯ ಇಂಗ್ಲೀಷ್ ಭಾಷಾಂತರವು ಅಷ್ಟು ಸಮರ್ಪಕವಾಗಿರಲಿಲ್ಲ. ಈಗ ನಾವು ಭಾರತದಲ್ಲಿ ಉಪಯೋಗಿಸುತ್ತಿರುವುದು ಇದೇ ಭಾಷಾಂತರವನ್ನೆ. ಇದು ಅಸಮರ್ಪಕವಾಗಿರುವುದಕ್ಕೆ ಕಾರಣ, ರಷ್ಯನ್ ಮೂಲವೇ ಅಸಮರ್ಪಕವಾಗಿತ್ತು. ಈಚೆಗೆ ನಿಕಿಟಿನ್ ಬಗ್ಗೆ ರಷ್ಯಾದಲ್ಲಿ ಉತ್ಸುಕತೆ ಹೆಚ್ಚಾಗಿದೆ. ಅವನ ಬಗ್ಗೆ ಅಧ್ಯಯನ ಹೆಚ್ಚಾಗಿದೆ. ಅವನಿಗೆ ರಷ್ಯನ್ ಸಾಹಿತ್ಯದಲ್ಲಿ ಮೇಲ್ಮಟ್ಟದ ಸ್ಥಾನ ದೊರಕಿದೆ. ಈ ಹೊಸ ಟೀಕಾಕಾರರ ಪ್ರಕಾರ ನಿಕಿಟಿನ್ ಅತ್ಯಂತ ಸಾಮಾನ್ಯ ಮನುಷ್ಯನ ಹಾಗೆ ಭಾರತಕ್ಕೆ ಭೇಟಿಕೊಟ್ಟನು. ಯುರೋಪಿನಿಂದ ಹೋದ ಇತರ ಪ್ರವಾಸಿಗಳು ರಾಜ–ಮಹಾರಾಜರ ಹಾಗೆ ತಿರುಗಾಡಿದರು. ನಿಕಿಟಿನ್ನನು ಇವರಿಗೆ ವಿರುದ್ಧ ಸಾಮಾನ್ಯ ಪ್ರಜೆಯ ಹಾಗೆ ಹೋಗಿ ಸಾಮಾನ್ಯ ಪ್ರಜೆಗಳ ಜತೆಗೆ ಸೇರಿ ಅವರ ನೋವು ನಲಿವುಗಳನ್ನು ಅರ್ಥಮಾಡಿಕೊಂಡು ಮನಮುಟ್ಟುವ ಹಾಗೆ ಬರೆದಿದ್ದಾನಂತೆ.[7]

೫. ಯಾವುದೊ ಕಾರಣದಿಂದ ನಮ್ಮ ಲಕ್ಷ್ಯ ಕೆಲವು ಪ್ರವಾಸಿಗಳ ಕಡೆ ಹರಿದೆ ಇಲ್ಲ, ಹರಿಯುವುದು ಅವಶ್ಯ. ಇದಕ್ಕೆ ಒಂದು ಉದಾಹರಣೆ, ಟಾಮ್ ಪರೇಸನ 'ಸುಮಾ ಓರಿಯಂಟಲ್.' ಪರೇಸನು ವಿಜಯನಗರದ ಬಗ್ಗೆ ಸಂಕ್ಷಿಪ್ತವಾಗಿ ಆದರೆ ಹೊಸ ವಿಷಯಗಳನ್ನು ಒಳಗೊಂಡು ಬರೆದಿದ್ದಾನೆ. ಅದರ ಬಂದರುಗಳಾದ ಹೊನ್ನಾವರ, ಭಟಕಳ್, ಮಂಗಳೂರುಗಳ ಬಗೆಗೆ ಬರೆದಿದ್ದಾನೆ. ಕೃಷ್ಣದೇವರಾಯನು ಕನ್ನಡದವನೆಂದು ಬರೆದಿದ್ದಾನೆ.[8] ವಿಜಯನಗರದ ಬಗ್ಗೆ ಬರೆಯುವವರು ಅದರಲ್ಲಿಯೂ ಕೃಷ್ಣದೇವರಾಯನ ಬಗ್ಗೆ ಬರೆಯುವವರು ಇವನ ವರದಿಯನ್ನು ಓದಲೇಬೇಕು.

ಕೊನೆಯದಾಗಿ, ಪ್ರವಾಸಿ ಸಾಹಿತ್ಯದ ಅಧ್ಯಯನದಲ್ಲಿ ಈ ಹೊಸ ಹೆಜ್ಜೆಗಳು ಏಕೆ ಅನಿವಾರ್ಯವೆಂದು ಈಗ ನೋಡೋಣ. ಹತ್ತೊಂಬತ್ತನೆಯ ಶತಮಾನದಲ್ಲಿ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಭಾರತೀಯ ಇತಿಹಾಸಕ್ಕೆ ಸಾಮಗ್ರಿಗಳನ್ನು ಹುಡುಕುವುದರಲ್ಲಿ ಇತಿಹಾಸಕಾರರು ನಿರತರಾಗಿದ್ದರು. ವಿದೇಶದಲ್ಲಿದ್ದ ಭಾರತೀಯರ ಚಟುವಟಿಕೆಗಳ ಕಡೆ ಅವರ ದೃಷ್ಟಿ ಹಾಯಲಿಲ್ಲ. ಈಗ ಆ ಭಾರತೀಯರ ಬಗೆಗೆ ತಿಳಿದುಕೊಳ್ಳುವ ಉತ್ಸುಕತೆ ಹೆಚ್ಚಾಗಿದೆ. ಪ್ರಾಚೀನ ಯುಗದಲ್ಲಿ ಕ್ರಿಸ್ತಶಕದ ಮೊದಲ ಸಾವಿರ ವರ್ಷಗಳಲ್ಲಿ ಚೀನಾಕ್ಕೂ ಭಾರತಕ್ಕೂ ನಿಕಟ ಸಂಪರ್ಕವಿತ್ತು. ನೂರಾರು ಭಾರತೀಯ ವಿದ್ವಾಂಸರು, ವ್ಯಾಪಾರಿಗಳು, ಕಲೆಗಾರರು ಅಲ್ಲಿಗೆ ಹೋಗಿ ನೆಲಸಿ ನಮ್ಮ ಸಂಸ್ಕೃತಿಯನ್ನೂ ಬೌದ್ಧಮತವನ್ನೂ ಹರಡಿದರು. ಆದರೆ ಅವರು ತಾವು ಮಾಡಿದ ಕೆಲಸದ ಬಗ್ಗೆ ಒಂದು ಚಕಾರವನ್ನೂ ಬರೆದಿಡಲಿಲ್ಲ. ಚೀನಿ ಪ್ರವಾಸಿಗಳು ತಮ್ಮ ಭಾರತದ ಪ್ರವಾಸದ ಬಗ್ಗೆ ಬರೆಯುವುದನ್ನು ನಮ್ಮ ಇತಿಹಾಸಕಾರರು ತಿಳಿದುಕೊಂಡಿದ್ದಾರೆ. ಚೀನಾದಲ್ಲಿಯ ಭಾರತೀಯರ ಚಟುವಟಿಕೆಗಳನ್ನು ನಾವು ಸಂಪೂರ್ಣವಾಗಿ ಅಲಕ್ಷಿಸಿದ್ದೇವೆ. ಈ ಚಟುವಟಿಕೆಗಳು ಚೀನಿಯ ಇತಿಹಾಸದಲ್ಲಿ ಹಾಸು ಹೊಕ್ಕಾಗಿವೆ. ಇದುವರೆಗೂ ಯುರೋಪಿಯನ್ನರು

---

6 S. Dutt : *Buddhist Monks and Monasteries of India :* ಈ ಪುಸ್ತಕದ ಅನುಬಂಧದಲ್ಲಿ, ಇತ್ಸಿಂಗನ ಎರಡನೇ ಪುಟದ ಭಾಷಾಂತರವಿದೆ.

7 *Bharat-Rus* : The Chapter on A.Nikitin

8 *The Suma Oriental of Tome Pires,* London, 1944

ಚೀನಿ ಇತಿಹಾಸದ ಬಗೆಗೆ ತಮ್ಮ ಭಾಷೆಯಲ್ಲಿ ಬರೆದಿದ್ದಾರೆ. ಈ ಗ್ರಂಥಗಳು ಭಾರತೀಯ ಇತಿಹಾಸಕಾರರಿಗೆ ಪರಿಚಯ ವಾಗಿವೆ. ಈಚೆಗೆ ಜಪಾನಿಯರು ಈ ಅಧ್ಯಯನದಲ್ಲಿ ಯುರೋಪಿನವರನ್ನು ಮತ್ತು ಚೀನಿಯರನ್ನು ಹಿಂದೆ ಹಾಕಿದ್ದಾರೆ. ನಮ್ಮವರು ಜಪಾನಿ ಮತ್ತು ಚೀನಿ ಭಾಷೆಗಳನ್ನು ಅಭ್ಯಾಸ ಮಾಡಿದರೆ ಪ್ರಾಚೀನ ಭಾರತೀಯ ಇತಿಹಾಸಕ್ಕೆ ವಿಪುಲಸಾಮಗ್ರಿಯನ್ನೂ ಅದರ ಅಧ್ಯಯನಕ್ಕೆ ಒಂದು ಹೊಸ ಆಯಾಮವನ್ನೂ ತಂದುಕೊಡಬಹುದು.

ಮಧ್ಯಯುಗದಲ್ಲಿ ಭಾರತೀಯರು ಪರ್ಷಿಯಾ ವನ್ನು ತಮ್ಮ ಕೇಂದ್ರವನ್ನಾಗಿ ಕೂಡಿಕೊಂಡು ಪಶ್ಚಿಮ ಏಷ್ಯಾ ಮತ್ತು ರಷ್ಯಾಗಳೊಡನೆ ತಮ್ಮ ವ್ಯಾಪಾರವನ್ನು ಬೆಳೆಸಿಕೊಂಡಿದ್ದರು. ಇವರ ಚಟುವಟಿಕೆಗಳು ಯುರೋಪಿನಿಂದ ಭಾರತಕ್ಕೆ ಬಂದ ಪ್ರವಾಸಿಗಳ ಬರೆಹ ಗಳಲ್ಲಿ ನಾವು ನೋಡಬಹುದು. ಇದುವರೆಗೂ ಈ ಯುರೋಪಿಯನ್ ಭಾಷೆಗಳಲ್ಲಿರುವ ಪ್ರವಾಸಿಗಳ ವರದಿ ಗಳ ಇಂಗ್ಲೀಷ್ ಭಾಷಾಂತರಗಳನ್ನು ನಾವು ಓದುತ್ತಿದ್ದೆವು. ಈಚೆಗೆ ಭಾರತೀಯರು ಫ್ರಾನ್ಸ್, ಜರ್ಮನಿ ಮತ್ತು ರಷ್ಯಾಗಳಿಗೆ ಹೋಗಿ ಆ ಭಾಷೆಗಳಲ್ಲಿ ನಮ್ಮಲ್ಲಿಗೆ ಬಂದ ಆದರೆ ಇದುವರೆಗೂ ನಮಗೆ ತಿಳಿಯದ ಪ್ರವಾಸಿಗಳ ಲೇಖನಗಳನ್ನು ಪತ್ತೆ ಹಚ್ಚಿದ್ದಾರೆ. ಹೀಗೆ ಪ್ರವಾಸಿ ಸಾಹಿತ್ಯ ವಿಪುಲವಾಗಿರುವುದನ್ನು ಮತ್ತು ಅವುಗಳ ಅಧ್ಯಯನದಿಂದ ನಮ್ಮ ಇತಿಹಾಸಕ್ಕೆ ಹೊಸ ಸಾಮಗ್ರಿ ದೊರಕುವುದನ್ನು ಕಂಡುಹಿಡಿದಿದ್ದಾರೆ.